

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 821 |
| ಸದಸ್ಯರ ಹೆಸರು | ಶ್ರೀ ಹೆಚ್.ಎಂ. ರಮೇಶ ಗೌಡ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 15.12.2020. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಅಕ್ರಮ ಮರಳು ಗಣಿಗಾರಿಕೆ ಮತ್ತು ಅಕ್ರಮ ಮರಳು ಸಾಗಾಣಿಕೆ ರಾಜಾರೋಷವಾಗಿ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಅದನ್ನು ತಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು. | ರಾಜ್ಯದಲ್ಲಿ ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಗಟ್ಟಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>• ಅನಧಿಕೃತ ಮರಳು ಗಣಿಗಾರಿಕೆ, ದಾಸ್ತಾನು, ಸಾಗಾಣಿಕೆಯನ್ನು ತಡೆಗಟ್ಟಲು ಪ್ರತಿ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮರಳು ಸಮಿತಿ ಹಾಗೂ ಉಪ ವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮರಳು ಸಮಿತಿಯನ್ನು ರಚಿಸಲಾಗಿರುತ್ತದೆ.<br>• ಮೇಲ್ಕಂಡ ಸಮಿತಿಯಲ್ಲಿ ಕಂದಾಯ, ಪೊಲೀಸ್, ಅರಣ್ಯ, ಲೋಕೋಪಯೋಗಿ, ಜಿಲ್ಲಾ ಪಂಚಾಯತ್, ಗಣಿ ಮತ್ತು ಭೂವಿಜ್ಞಾನ ಹಾಗೂ ಪ್ರಾದೇಶಿಕ ಸಾರಿಗೆ ಇಲಾಖೆ ಅಧಿಕಾರಿಗಳು ಸದಸ್ಯರುಗಳಾಗಿರುತ್ತಾರೆ.<br>• ಸದರಿ ಇಲಾಖೆಗಳ ಅಧಿಕಾರಿಗಳಿಗೆ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳನ್ನು ತಡೆಯಲು ಸಂಬಂಧಪಟ್ಟ ಪೊಲೀಸ್ ಠಾಣೆಗಳಲ್ಲಿ ಹಾಗೂ ನ್ಯಾಯಾಲಯಗಳಲ್ಲಿ ಮೊಕದ್ದಮೆ ದಾಖಲಿಸಲು ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957ರ ಕಲಂ 4(1), 4(1-A) ಮತ್ತು ಕಲಂ 21 ಮತ್ತು 22 ರಡಿಯಲ್ಲಿ ಹಾಗೂ ಕರ್ನಾಟಕ ಉಪ ಖನಿಜ (ತಿದ್ದುಪಡಿ) ರಿಯಾಯಿತಿ ನಿಯಮಗಳು, 2016ರ ನಿಯಮ 31-Rರ ಉಪ ನಿಯಮ 13 ರಡಿಯಲ್ಲಿ ಅಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.<br>• ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲು ಜಿಲ್ಲಾ ಮರಳು ಉಸ್ತುವಾರಿ ಸಮಿತಿಗಳಿಂದ ರಾಜ್ಯದಲ್ಲಿ ಆಯಕಟ್ಟಿನ ಪ್ರದೇಶಗಳಲ್ಲಿ ಮರಳು ತನಿಖಾ ಠಾಣೆಗಳನ್ನು ತೆರೆದು ಕಾರ್ಯ ನಿರ್ವಹಿಸಲಾಗುತ್ತಿದೆ. |

- ಅಲ್ಲದೆ ಸಂಬಂಧಪಟ್ಟ ಜಿಲ್ಲಾ ವ್ಯಾಪ್ತಿಗಳಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಚಾಲಿತ ದಳವನ್ನು ರಚಿಸಿಕೊಂಡು ಅನಧಿಕೃತ ಮರಳು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲಾಗುತ್ತಿದೆ.
- ಮರಳು ಗಣಿಗಾರಿಕೆಗೆ ಗುತ್ತಿಗೆ / ಲೈಸನ್ಸ್ ಮಂಜೂರು ಮಾಡುವ ಪೂರ್ವದಲ್ಲಿ ಕೇಂದ್ರ ಅರಣ್ಯ, ಪರಿಸರ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯದ ಆದೇಶದಂತೆ ಸಂಬಂಧಪಟ್ಟ ಅರ್ಜಿದಾರರಿಂದ ಕಡ್ಡಾಯವಾಗಿ ಕ್ವಾರಿ ಯೋಜನೆ ಮತ್ತು ಪರಿಸರ ಅನುಮತಿ ಪತ್ರ ಪಡೆದ ನಂತರವೇ ಗುತ್ತಿಗೆ / ಲೈಸನ್ಸ್ ಗಳನ್ನು ಮಂಜೂರು ಮಾಡಲಾಗುತ್ತದೆ.
- ಸದರಿ ಗುತ್ತಿಗೆದಾರರುಗಳು ಪರಿಸರ ಅನುಮತಿ ಪತ್ರದಲ್ಲಿನ ಷರತ್ತುಗಳಿಗೆ ಅನುಸಾರವಾಗಿ ಗಣಿ ಕಾರ್ಯ ನಿರ್ವಹಿಸದಿದ್ದರೆ ಅವರುಗಳ ವಿರುದ್ಧ ನಿಯಮಾನುಸಾರ ಕ್ರಮವಹಿಸಲಾಗುವುದು.
- ಕಳೆದ 03 ವರ್ಷಗಳಲ್ಲಿ ಅನಧಿಕೃತ ಮರಳು ಗಣಿಗಾರಿಕೆ ಚಟುವಟಿಕೆಗಳಿಂದ ಸಂಗ್ರಹಿಸಲಾದ ದಂಡದ ಮೊತ್ತ ಹಾಗೂ ದಾಖಲಿಸಲಾದ ಮೊಕದ್ದಮೆಗಳ ವಿವರಗಳು ಈ ಕೆಳಕಂಡಂತಿರುತ್ತವೆ.

(ರೂ. ಲಕ್ಷಗಳಲ್ಲಿ)

| ವರ್ಷ | ಅನಧಿಕೃತ ಮರಳು ಗಣಿಗಾರಿಕೆ | | | ಅನಧಿಕೃತ ಮರಳು ಸಾಗಾಣಿಕೆ | | |
|---|---|---|---|---|---|---|
| | ಪತ್ತೆ ಹಚ್ಚಿದ ಪ್ರಕರಣ ಗಳ ಸಂಖ್ಯೆ | ವಸೂಲಾದ ದಂಡ | ದಾಖಲಿಸಿದ ಮೊಕದ್ದಮೆಗಳ ಸಂಖ್ಯೆ | ಪತ್ತೆ ಹಚ್ಚಿದ ಪ್ರಕರಣಗಳ ಸಂಖ್ಯೆ | ವಸೂಲಾದ ದಂಡ | ದಾಖಲಿಸಿದ ಮೊಕದ್ದಮೆ ಗಳ ಸಂಖ್ಯೆ |
| **2018-19** | **191** | **54.62** | **106** | **3361** | **375.57** | **2584** |
| **2019-20** | **240** | **128.81** | **106** | **2676** | **271.01** | **1866** |
| **2020-21** | **80** | **30.88** | **34** | **439** | **49.93** | **264** |

ಆ. ಮರಳು ಗಣಿಗಾರಿಕೆ ವಿಷಯದಲ್ಲಿ ಸರ್ಕಾರದ ನಿಯಮಾವಳಿಗಳು ಅನುಷ್ಠಾನಗೊಂಡಿವೆಯೇ; (ವಿವರ ನೀಡುವುದು)

ಸರ್ಕಾರವು ದಿನಾಂಕ 05.05.2020 ರಂದು ರಾಜ್ಯದಲ್ಲಿ ನೂತನ ಮರಳು ನೀತಿ, 2020 ನ್ನು ಹಾಗೂ ಸದರಿ ಮರಳು ನೀತಿಯ ಅನುಷ್ಠಾನಕ್ಕಾಗಿ ಮಾರ್ಗಸೂಚಿಗಳನ್ನು ಜಾರಿಗೆ ತಂದಿರುತ್ತದೆ. ಅದರನ್ವಯ ಈ ಕೆಳಕಂಡಂತೆ ಹೊಸ ಮರಳು ನೀತಿ, 2020ನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದೆ.

- I, II ಮತ್ತು III ನೇ ಶ್ರೇಣಿಯ ಹಳ್ಳ / ತೊರೆ ಮತ್ತು ಕೆರೆಗಳಲ್ಲಿ ಲಭ್ಯವಿರುವ ಮರಳನ್ನು ತೆಗೆಯುವ ಮತ್ತು ವಿಲೇವಾರಿ ಮಾಡುವ ಸಂಪೂರ್ಣ ಹೊಣೆಗಾರಿಕೆಯನ್ನು ಸಂಬಂಧಿಸಿದ ಗ್ರಾಮ ಪಂಚಾಯತ್‌ಗಳಿಗೆ ವಹಿಸಲಾಗಿರುತ್ತದೆ.

--3

| | | |
|---|---|---|
| | | • ಅದರಂತೆ, ರಾಜ್ಯದಲ್ಲಿ ಒಟ್ಟು I, II ಮತ್ತು III ನೇ ಶ್ರೇಣಿಯ ಹಳ್ಳಗಳಲ್ಲಿ ಒಟ್ಟು 156 ಮರಳು ನಿಕ್ಷೇಪದ ಪ್ರದೇಶಗಳನ್ನು ಗುರುತಿಸಲಾಗಿರುತ್ತದೆ. ಈ ಪೈಕಿ 28 ಮರಳು ನಿಕ್ಷೇಪ ಪ್ರದೇಶಗಳಿಗೆ ಆಯಾ ಜಿಲ್ಲಾ ಮರಳು ಸಮಿತಿಗಳಿಂದ ಸಂಬಂಧಪಟ್ಟ ಗ್ರಾಮ ಪಂಚಾಯಿತಿಗಳು ಮರಳು ತೆಗೆಯಲು ಅಧಿಸೂಚನೆ ಹೊರಡಿಸಲಾಗಿರುತ್ತದೆ.<br>• IV, V ಮತ್ತು VI ನೇ ಶ್ರೇಣಿಯ ಹೊಳೆ / ನದಿಗಳಲ್ಲಿ ಲಭ್ಯವಿರುವ ಮರಳನ್ನು ಮತ್ತು ಅಣೆಕಟ್ಟು / ಜಲಾಶಯ / ಬ್ಯಾರೇಜ್‌ಗಳು ಮತ್ತು ಸದರಿ ಹಿನ್ನೀರಿನ ಪ್ರದೇಶಗಳಲ್ಲಿ ಹೂಳು ತೆಗೆಯುವ ಮುಖಾಂತರ ದೊರೆಯುವ ಮರಳನ್ನು ತೆಗೆದು ವಿಲೇವಾರಿ ಮಾಡಲು ಸರ್ಕಾರದ ಆದೇಶ ಸಂಖ್ಯೆ: ಸಿಐ 344 ಎಂಎಂಎನ್ 2019, ದಿನಾಂಕ 18.05.2020 ರಂತೆ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಾದ ಮೆ॥ ಕರ್ನಾಟಕ ಸ್ಟೇಟ್ ಮಿನರಲ್ ಕಾರ್ಪೋರೇಶನ್ ಲಿ., ಮತ್ತು ಮೆ॥ ಹಟ್ಟಿ ಚಿನ್ನದ ಗಣಿ ನಿಯಮಿತ ಇವರಿಗೆ ವಹಿಸಲಾಗಿರುತ್ತದೆ.<br>• ರಾಜ್ಯದಲ್ಲಿ IV, V ಮತ್ತು VI ನೇ ಶ್ರೇಣಿಯ ಹಳ್ಳ / ನದಿ ಪಾತ್ರಗಳಲ್ಲಿ ಒಟ್ಟು 102 ಮರಳು ಬ್ಲಾಕ್ ಗಳಲ್ಲಿ ಮರಳು ಗಣಿಗಾರಿಕೆ ನಡೆಸಲು ಮೆ॥ ಕರ್ನಾಟಕ ಸ್ಟೇಟ್ ಮಿನರಲ್ ಕಾರ್ಪೋರೇಶನ್ ಲಿ., ಮತ್ತು ಮೆ॥ ಹಟ್ಟಿ ಚಿನ್ನದ ಗಣಿ ನಿಯಮಿತ ಇವರಿಗೆ ಅಧಿಸೂಚನೆ ಹೊರಡಿಸಲಾಗಿರುತ್ತದೆ.<br>• ಅಣೆಕಟ್ಟು / ಜಲಾಶಯ / ಬ್ಯಾರೇಜ್ ಹಾಗೂ ಅವುಗಳ ಹಿನ್ನೀರಿನ ಪ್ರದೇಶಗಳಲ್ಲಿ ಹೂಳಿನೊಂದಿಗಿರುವ ಮರಳನ್ನು ತೆಗೆಯಲು 8 ಪ್ರದೇಶಗಳನ್ನು ಗುರುತಿಸಿ, ಸಂಬಂಧಪಟ್ಟ ಸಂಸ್ಥೆಗಳಿಗೆ ಅಧಿಸೂಚನೆ ಹೊರಡಿಸಲಾಗಿರುತ್ತದೆ. |
| ಇ. | ಅಕ್ರಮ ಮರಳು ಗಣಿಗಾರಿಕೆ ತಡೆಯುವ ನಿಷ್ಠಾವಂತ ಅಧಿಕಾರಿಗಳ ರಕ್ಷಣೆಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಅನಧಿಕೃತ ಮರಳು ಗಣಿಗಾರಿಕೆಯನ್ನು ತಡೆಯುವ ಅಧಿಕಾರಿಗಳ ರಕ್ಷಣೆಗೆ ಸಂಬಂಧಪಟ್ಟಂತೆ ಪೊಲೀಸ್ ಇಲಾಖೆಯ ಮೂಲಕ ಸೂಕ್ತ ರಕ್ಷಣೆಯನ್ನು ಒದಗಿಸಲಾಗುತ್ತಿದೆ. |
| ಈ. | ಸರ್ಕಾರಿ ಅಧಿಕಾರಿಗಳ ಮೇಲೆ ಹಲ್ಲೆ ಮಾಡಿದವರ ವಿರುದ್ಧ ಸರ್ಕಾರ ಜರುಗಿಸಿದ ಕಾನೂನು ಕ್ರಮಗಳೇನು? (ವಿವರ ನೀಡುವುದು) , | ರಾಜ್ಯದ ತುಮಕೂರು, ದಕ್ಷಿಣ ಕನ್ನಡ, ಗದಗ, ಉಡುಪಿ ಹಾಗೂ ರಾಯಚೂರು ಜಿಲ್ಲೆಗಳಲ್ಲಿ ಸರ್ಕಾರಿ ಅಧಿಕಾರಿಗಳ ಮೇಲೆ ದಾಳಿ ಮಾಡಿರುವ ಪ್ರಕರಣಗಳು ಜರುಗಿರುವುದು ಕಂಡುಬಂದಿರುತ್ತದೆ. ಇದಕ್ಕೆ ಕಾರಣರಾದವರ ವಿರುದ್ಧ ಸಂಬಂಧಪಟ್ಟ ಪೊಲೀಸ್ ಠಾಣೆಗಳಲ್ಲಿ ಮೊಕದ್ದಮೆಗಳನ್ನು ದಾಖಲಿಸಲಾಗಿರುತ್ತದೆ. ವಿವರಗಳನ್ನು **ಅನುಬಂಧದಲ್ಲಿ ಒದಗಿಸಲಾಗಿದೆ.** |

ಸಂಖ್ಯೆ: ಸಿಐ 677 ಎಂಎಂಎನ್ 2020

(ಸಿ.ಸಿ. ಪಾಟೀಲ)

ಗಣಿ ಮತ್ತು ಭೂವಿಜ್ಞಾನ ಸಚಿವರು

**ಅನುಬಂಧ–1**

## ಅಕ್ರಮ ಮರಳು ಗಣಿಗಾರಿಕೆ / ಸಾಗಾಣಿಕೆ ತಡೆಯಲು ಬಂದ ಅಧಿಕಾರಿಗಳ ಮೇಲೆ ಹಲ್ಲೆಗಳು ನಡೆಸಿದವರ ವಿರುದ್ಧ ಕೈಗೊಂಡ ಕ್ರಮದ ವಿವರಗಳು.

| ಕ್ರ ಸಂ. | ಜಿಲ್ಲೆ | ತಾಲ್ಲೂಕು | ವರ್ಷ | ಕೃತ್ಯ ನಡೆದ ದಿನಾಂಕ | ಹಲ್ಲೆಗೊಳಪಟ್ಟ ಅಧಿಕಾರಿಯ ಹೆಸರು ಮತ್ತು ಪದನಾಮ | ದಾಳಿ ನಡೆಸಿದವರ ಮೇಲೆ ಕೈಗೊಂಡ ಕ್ರಮ |
|---|---|---|---|---|---|---|
| 1 | ತುಮಕೂರು | ಶಿರಾ | 2014–15 | 20.02.2015 | ಹಾಲಪ್ಪ, ಸಹಾಯಕ ಸಬ್‌ಇನ್‌ಸ್ಪೆಕ್ಟರ್, ತಾವರೆಕೆರೆ. ಪೊಲೀಸ್‌ಠಾಣೆ | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:18/2015 |
| 2 | | ತುಮಕೂರು | 2014–15 | 10.10.2014 | ಚನ್ನಿಂಗರಾಮಯ್ಯ, ಕಂದಾಯಅಧಿಕಾರಿ. | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:283/2014 |
| 3 | | ಕುಣಿಗಲ್ | 2014–15 | 30.04.2014 | ವಿಜಯಕುಮಾರ್. ಎಂ.ಬಿ, ಲೋಕೋಪಯೋಗಿ ಇಲಾಖೆ, ಮತ್ತುಇತರೆ 7 ಅಧಿಕಾರಿಗಳು | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:96/2014 |
| 4 | | ಕೊರಟಗೆರೆ | 2015–16 | 07.08.2015 | ಮೃತ್ಯುಂಜಯ, ಪಿ.ಎಸ್.ಐ ಮತ್ತುಇತರೆ 03 ಜನ ಪೋಲೀಸ್ ಸಿಬ್ಬಂದಿ | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:271/2015 |
| 5 | | ಕೊರಟಗೆರೆ | 2015–16 | 21.09.2015 | ಮುನಿರಾಜು.ಎಸ್, ಪಿ.ಎಸ್.ಐ ಮತ್ತುಇತರೆ 02 ಜನ ಪೋಲೀಸ್ ಸಿಬ್ಬಂದಿ | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:313/2015 |
| 6 | | ಕೊರಟಗೆರೆ | 2016–17 | 05.06.2016 | ರಮೇಶ್ ಬಾಬು, ಪೋಲೀಸ್ ಸಿಬ್ಬಂದಿ | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:128/2016 |
| 7 | | ತುರುವೇಕೆರೆ | 2016–17 | 09.09.2016 | ಹೊನ್ನೇಗೌಡ, ಪಿ.ಎಸ್.ಐ ಮತ್ತುಚಂದ್ರಶೇಖರ್, ಪೋಲೀಸ್ ಸಿಬ್ಬಂದಿ | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:175/2016 |
| 8 | | ತುಮಕೂರು | 2016–17 | 19.01.2017 | ಯೋಗೇಶ್, ಪೋಲೀಸ್ ಸಿಬ್ಬಂದಿ | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:03/2017 |
| 9 | ಮಂಗಳೂರು | ಮಂಗಳೂರು | 2015–16 | ಜನವರಿ–2016 | ಗಿರೀಶ್ ಮೋಹನ್, ಭೂವಿಜ್ಞಾನಿ, | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:12/2016 |
| 10 | | ಬಂಟ್ವಾಳ | 2016–17 | 20.02.2017 | ಗಿರೀಶ್ ಮೋಹನ್, ಭೂವಿಜ್ಞಾನಿ, | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:23/2017 |
| 11 | | ಬಂಟ್ವಾಳ | 2016–17 | 03.03.2017 | ಗಿರೀಶ್ ಮೋಹನ್, ಭೂವಿಜ್ಞಾನಿ, | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:55/2017 |
| 12 | | ಮಂಗಳೂರು | 2016–17 | 30.03.2016 | ಬಿ.ಕೆ.ಮೂರ್ತಿ, ಭೂವಿಜ್ಞಾನಿ | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:92/2016 |
| 13 | ಗದಗ | ಲಕ್ಷ್ಮೇಶ್ವರ | 2016–17 | 5.2.2017 | ದೇವನಂದ, ಪೋಲೀಸ್ ಉಪ ನಿರೀಕ್ಷಕರು ಮತ್ತುಇತರೆಇಬ್ಬರು ಪೋಲೀಸ್ ಸಿಬ್ಬಂದಿ | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:21/2017 |
| 14 | ಉಡುಪಿ | ಕುಂದಾಪುರ | 2017–18 | 02.04.2017 | ಪ್ರಿಯಾಂಕ ಮೇರಿ ಫ್ರಾನ್ಸಿಸ್, ಐ.ಎ.ಎಸ್‌ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ ಹಾಗೂ ಶಿಲ್ಪಾನಾಗ್, ಕುಂದಾಪುರ ಉಪವಿಭಾಗಾಧಿಕಾರಿ ಮತ್ತುಇತರೆ 05 ಕಂದಾಯ ಇಲಾಖೆ ಅಧಿಕಾರಿಗಳು | ಎಫ್.ಐ.ಆರ್‌ದಾಖಲಿಸಲಾಗಿರುತ್ತದೆ ಸಂಖ್ಯೆ:42/2017 |
| 15 | ರಾಯಚೂರು | ಮಾನವಿ | 2018–19 | 22.12.2018 | ದಿ॥ ಸಾಹೇಬ ಪಾಟೀಲ್, ಗ್ರಾಮ ಲೆಕ್ಕಾಧಿಕಾರಿ | ಮಾನವಿ ಪೋಲೀಸ್‌ಠಾಣೆಯಲ್ಲಿ ದಿನಾಂಕ: 22.12.2018 ರಂದು ಪ್ರಕರಣ ಸಂಖ್ಯೆ: 357/2018 ದಾಖಲಿಸಲಾಗಿರುತ್ತದೆ. |

CS 677 MMN 2020